ಮಹಾರಾಜರ ಸಂಬಂಧ ವಿಶೇಷ ಸಮಾಚಾರವನ್ನು ಕೇಳಿಕೊಂಡಿದ್ದನು. ಆಗ ಸಹಜೀಕವಾಗಿ ನಾನು ಶ್ರೀಗಜಾನನ ಮಹಾರಾಜರ ಕಡೆ ಹೋಗಿ ಅವರ ಅನುಗ್ರಹವನ್ನು ಪಡೆಯಬೇಕೆಂದು ನನ್ನ ತಂದೆಯವರ ಇಚ್ಛೆ ಇತ್ತು: ಎಂಬದಾಗಿ ಅವರ ನಿತ್ಯದ ಭಾಷಣದ ಮೇಲಿಂದ ನನಗೆ ತಿಳಿದು ಬಂತು.

ಯಾವ ದಿವಸ ಶ್ರೀಗಜಾನನ ಮಹಾರಾಜ ಬನಿ ವೃತ್ತಾಂತವು ನನ್ನ ತಂದೆಯವರಿಗೆ ಗೊತ್ತಾಯಿತು, ಆಗ ಮಧ್ಯಾಹ್ನದ ನಾಲ್ಕುನಾಲ್ಕುವರೆ ಘಂಟೆ ಆಗಿತ್ತು. ನಂತರ ನನ್ನ ತಂದೆಯವರು ನನಗೆ ಶ್ರೀಗಜಾನನ ಮಹಾರಾಜರ ಕಡೆ ಹೋಗಲಿಕ್ಕೆ ಯಾವ ದಿವಸ ಹೇಳಿದ್ದರೊ, ಆಗ ಸಹಾ ಮಧ್ಯಾಹ್ನದ ಮೇಲೆ ನಾಲ್ಕುನಾಲ್ಕುವರೆ ಘಂಟೆ ಆಗಿತ್ತು. ಮುಂದೆ ಮಹಾರಾಜರ ಪ್ರಥಮ ಭೆಟ್ಟಿ ನಂತರ ಎರಡುಮೂರು ವರ್ಷಗಳಲ್ಲಿ, ಯಾವ ಕಾಲದಲ್ಲಿ ನಾನು ಮಹಾರಾಜರ ಕಡೆ ಹೋದೆನು, ಆಗ ಸಹಾ ಮಧ್ಯಾಹ್ನದ ಮೇಲೆ ನಾಲ್ಕುನಾಲ್ಕುವರೆ ಆಗಿತ್ತು. ಈ ಸಂಗತಿಯು ನನಗೆ ಚನ್ನಾಗಿ ನೆನಪಿದೆ.

ಎರಡನೇ ಸಾರೆ ನಾನು ಶ್ರೀಗಜಾನನ ಮಹಾರಾಜರ ಕಡೆ ಹೋಗಿದ್ದು ಸಹಾ ಒಂದು ವಿಲಕ್ಷಣ ಘಟನೆ ಮೂಲಕವೇ. ಆ ದಿನ ಸಂಜೆ ನಾಲ್ಕರಷ್ಟಕ್ಕೆ ನಾನು ಏನೊ ಒಂದು ಪತ್ರಿಕೆಯನ್ನು ಬರಿಯಲಿಕ್ಕೆ ಕೂತಿದ್ದಾಗ, ಒಮ್ಮಿಂದೊಮ್ಮೆ ಬ್ಯಾಟರಿಯಂತೆ ನನ್ನ ಶರೀರದಲ್ಲಿ ಶಕ್ತಿ ಉತ್ಪನ್ನವಾಯಿತು ಮತ್ತು ಶ್ರೀಗಜಾನನ ಮಹಾರಾಜರ ಕಡೆ ಹೋಗಬೇಕೆಂತ ಇಚ್ಛೆ ಆಯಿತು. ನಾನು ಹ್ಯಾಗೆ ಹ್ಯಾಗೆ ಆ ಶಕ್ತಿಗೆ ವಿರೋಧ ಮಾಡಬೇಕೆಂತ ಯತ್ನಿಸಿದೆ, ಹಾಗೆ ಹಾಗೆ ಮಹಾರಾಜರ ಕಡೆ ಹೋಗುವ ವಿಚಾರವೂ ಆ ಶಕ್ತಿಯೂ ವೃದ್ಧಿಯಾಗುತ್ತ ನಡೆದವು ಕಡೆಗೆ ನನಗೆ ಶ್ರೀಗಜಾನನ ಮಹಾರಾಜರ ಕಡೆ ಹೋಗಲೇಬೇಕಾಯಿತು. ಮಹಾರಾಜರ ಕಡೆ ಹೋಗಿ ಅವರಿಗೆ ನಮಸ್ಕಾರ ಮಾಡಿದ ಕೂಡಲೆ ಮಹಾರಾಜರು ನಗುನಗುತ್ತ ನನಗೆ ಕೇಳಿದರು, " ಯಾವ ಸಂತನು ನಿನಗ ಇಲ್ಲಿಗೆ ಕರಕೊಂಡು ಬಂದನು ? " ಆಗ ನಾನು ಅವರಿಗೆ ನಡೆದ ಸಂಗತಿಯನ್ನು ಹೇಳಿದೆ. ಮಹಾರಾಜರ ಸಂಬಂಧ ನನ್ನ ಮೊದಲಿನ ಅನುಭವವು ಮೇಲೆ ಹೇಳಿದ ಪ್ರಕಾರ ಇದೆ.

ಅದರ ನಂತರ ನಾನು ಆಗಾಗ್ಗೆ ಮಹಾರಾಜರ ಕಡೆಗೆ ಹೋಗುತ್ತಿದ್ದೆನು. ಆ ಸಮಯದಲ್ಲಿ ರಾಮಕೃಷ್ಣ ಪರಮಹಂಸರ ಹೆಸರು ನನಗೆ ಗೊತ್ತಿದ್ದಿಲ್ಲ. ಮಹಾರಾಜರ ಶಿಷ್ಯ ಸಾಯಗಾಂವಕರ ( ಫೋಟೊ ಆರ್ಟಿಸ್ಟ ) ಇವರ ಕಡೆಯಿಂದ ನನಗೆ ರಾಮಕೃಷ್ಣರ ಪುಸ್ತಕಗಳು ಓದಲಿಕ್ಕೆ ಸಿಕ್ಕಿದವು. ಮೊದಲಿನಿಂದಲೇ ವಿವೇಕಾನಂದರ ಮೇಲೆ ನನ್ನ ಭಕ್ತಿ ಇತ್ತು ಮತ್ತು ರಾಮಕೃಷ್ಣ ಪರಮಹಂಸರು ಇವರು ವಿವೇಕಾನಂದರ ಗುರುಗಳಿದ್ದರು ಇದು ತಿಳಿದ ಮೇಲೆ ರಾಮಕೃಷ್ಣರ ಕಡೆ ನನ್ನ

ಮನಸ್ಸು ಆಕರ್ಷಿಸಲ್ಪಟ್ಟಿತು. ಇದರ ಹೊರತಾಗಿ ಇವರಿಗೆ 'ಅವತಾರ ಪುರುಷ' ಹೀಗೆ ಪದವಿ ಇದ್ದ ಮೂಲಕ ಮತ್ತು ಇತರ ಸಂತರಿಗೆ ಅದು ಇಲ್ಲವಿದ್ದರಿಂದ ರಾಮಕೃಷ್ಣ ಪರಮಹಂಸ ಇವರು 'ಸಂತ ಸಮ್ರಾಟ' ಎಂದು ನಾನು ತಿಳಿದೆ. ಆ ಕಾರಣ ನಾನು ಅವರದೇ ಧ್ಯಾನವನ್ನು ಮಾಡುತ್ತಿದ್ದೆನು. ಈ ಸಂಗತಿಯನ್ನು ನಾನು ಗಜಾನನ ಮಹಾರಾಜರಿಗೆ ಹೇಳಲಿಲ್ಲ; ಯಾಕೆಂದರೆ ನಾನು ಗಜಾನನ ಮಹಾರಾಜರು ರಾಮಕೃಷ್ಣ ಪರಮಹಂಸರಿಗಿಂತ ಕಡಿಮೆ ದರ್ಜೆಯವರೆಂತ ತಿಳಿದಿದ್ದೆ. ಶ್ರೀಗಜಾನನ ಮಹಾರಾಜರನ್ನು ಕಡಿಮೆಯವರೆಂತ ತಿಳಕೊಂಡು, ನಾನು ರಾಮಕೃಷ್ಣಪರಮಹಂಸರ ಧ್ಯಾನವನ್ನು ಮಾಡುತ್ತಿದ್ದೆ. ಒಂದೆರಡು ತಿಂಗಳಲ್ಲಿ ಹೀಗೆ ಚಮತ್ಕಾರವಾಯಿತಲ್ಲ, ನನ್ನ ಧ್ಯಾನದಲ್ಲಿ ರಾಮಕೃಷ್ಣರ ರೂಪಾಂತರವಾಗಿ ಆ ಸ್ಥಳದಲ್ಲಿ ಶ್ರೀಗಜಾನನ ಮಹಾರಾಜರ ಮೂರ್ತಿಯು ಕಾಣುತ್ತಿತ್ತು. ರಾಮಕೃಷ್ಣ ಪರಮಹಂಸರು ಮತ್ತು ಶ್ರೀಗಜಾನನ ಮಹಾರಾಜರು ಇಬ್ಬರಲ್ಲಿ ಎಂಬದು ಮೇಲಿನಂತೆ ಮಹಾರಾಜರು ನನಗೆ ಪ್ರತ್ಯಕ್ಷ ತೋರಿಸಿಕೊಟ್ಟರು. ಶ್ರೀಗಜಾನನ ಮಹಾರಾಜರನ್ನು ಕಡಿಮೆ ಎಂದು ತಿಳಿದದ್ದಕ್ಕೆ ನನಗೆ ನಾಚಿಕೆಯಾಯಿತು.

ಇದರ ನಂತರ ಒಂದು ದಿನ ಸಂಜೆ ಹೊತ್ತಿಗೆ ನಾನು ಅವರ ದರ್ಶನಕ್ಕೆ ಹೋಗಿರುವಾಗ್ಗೆ, ನನಗೆ ಉಪದೇಶ ಕೊಡಬೇಕೆಂದು ನಾನು ವಿನಂತಿ ಮಾಡಿದೆ. ಆಗ ಅವರು ಮಾಲೆಯನ್ನು ತಕ್ಕೊಂಡು ಮರುದಿನ ಬರಲಿಕ್ಕೆ ನನಗೆ ಹೇಳಿದರು. ಮರುದಿನ ಏನೊ ಅಡಚಣಿ ದೆಸೆಯಿಂದ ಮಾಲೆಯನ್ನು ತಕ್ಕೊಳ್ಳದೆ ನಾನು ಮಹಾರಾಜರ ಕಡೆಗೆ ಹೋದೆನು. ನಾನು ಮಾಲೆ ತರಲಿಲ್ಲವೆಂಬವನ್ನು ಅವರಿಗೆ ಹೇಳಿದ್ದಕ್ಕೆ ಅವರು 'ಮನಸ್ಸಿನ ಮಾಲೆ ಅದೆಯಲ್ಲ ನಿನ್ನ ಹತ್ತರ?' ಹೀಗೆಂದ ಮಹಾರಾಜರು ನನ್ನ ಮೇಲೆ ಅನುಗ್ರಹವನ್ನು ಮಾಡಿದರು

ಅನುಗ್ರಹ [illegible] ತಿಂಗಳಲ್ಲಿ ನನಗೊಂದು ವಿಲಕ್ಷಣ ಅನುಭವವು ಬಂತು

ನಮ್ಮ ಮನೆಯಲ್ಲಿ ತಂದೆಯವರ ಕಾಲವಲಾಗಾಯಿತು, ಪ್ರದತ್ತಾವತಾರ ಪೂರ್ಣಾನಂದ ಸ್ವಾಮಿಯವರ ಪ್ರಾಸಾದಿಕ ಪಾದುಕೆಗಳವೆ (ಪೂರ್ವಖಾನದೇಶದಲ್ಲಿ ನಗರ ದೇವಳದ ಹತ್ತರ 'ಸ್ವಾಮಿಚೆ ವಡಗಾಂವ' ಎಂಬ ಹೆಸರಿನ ಒಂದು ಊರದೆ, ಅಲ್ಲಿ ಪೂರ್ಣಾನಂದ ಸ್ವಾಮಿಯವರ ಸಂಗಮರವರಿ ಪಾದುಕೆಗಳು ಅವೆ. ಆ ಸ್ಥಾನದಲ್ಲಿ ಭೂತಬಾಧೆ ವಗೈರೆ ಹೋಗುತ್ತವೆ. ಅಲ್ಲಿಯ ವ್ಯವಸ್ಥಾಪಕ ಸ್ವಾಮಿಯವರ ಪ್ರಸಾದವೆಂದು ನನ್ನ ತಂದೆಯವರಿಗೆ ಬೆಳ್ಳಿಯ ಸಣ್ಣ ಪಾ-ಗಳನ್ನು ಕೊಟ್ಟಿದ್ದನು.) ಒಮ್ಮೆ ದೇವಪೂಜೆಯನ್ನು ಮಾಡುತ್ತಿರುವಾಗ ಆ ಪಾ-ಕೆಗಳನ್ನು ಅಭಿಷೇಕಕ್ಕೋಸ್ಕರ ತಾಟಿನಲ್ಲಿ ಇಟ್ಟು, ಅದರ ಮೇಲೆ ಅಭಿಷೇಕ -